

ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಸಂಪುಟ: ೦೨ ಸಂಚಿಕೆ: ೦೭ | ಅಕ್ಟೋಬರ್ ೨೦೧೫ | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 02 Issue 07 | October 2015 | Editor : Sri. B.R. Ravindranath




**ಚಂದಾ ವಿವರಗಳು**

**ವಾರ್ಷಿಕ ಚಂದಾ**
**ರೂ. ೨೦/–**
**ಐದು ವರ್ಷಗಳ ಚಂದಾ**
**ರೂ. ೧೦೦/–**


ವಿಳಾಸ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
**ಸ್ಥಾಪನೆ : ೦೬–೦೫–೧೯೭೯**
**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com


## ಶ್ರೀಮತಿ ಸಾವಿತ್ರಮ್ಮ – ಪ್ರೊ|| ಎಂ.ವಿ.ಸೀ. ಸಾಹಿತ್ಯ ಪುರಸ್ಕಾರ–2015

ಪ್ರಶಸ್ತಿ ಪುರಸ್ಕೃತರು: **ಶ್ರೀಮತಿ ಬಾನುಮುಷ್ತಾಕ್**

ಪ್ರಶಸ್ತಿ ಪ್ರದಾನ: **ಡಾ|| ಕೆ. ಮರುಳಸಿದ್ದಪ್ಪ**
**ಕರ್ನಾಟಕ ನಾಟಕ ಅಕಾಡೆಮಿಯ ಮಾಜಿ ಅಧ್ಯಕ್ಷರು, ಖ್ಯಾತ ವಿಮರ್ಶಕರು**

19–09–2015ರಂದು ಡಾ. ಕೆ. ಮರುಳಸಿದ್ದಪ್ಪ ಅವರು 2015ರ ಶ್ರೀಮತಿ ಸಾವಿತ್ರಮ್ಮ – ಪ್ರೊ|| ಎಂ.ವಿ.ಸೀ. ಸಾಹಿತ್ಯ ಪುರಸ್ಕಾರವನ್ನು ನ್ಯಾಯವಾದಿ ಹಾಗೂ ಸಾಹಿತಿ ಶ್ರೀಮತಿ ಬಾನುಮುಷ್ತಾಕ್ ಅವರಿಗೆ ಪ್ರದಾನ ಮಾಡಿದರು. ರೂ. 25000/– ಚೆಕ್ ಹಾಗೂ ಸ್ಮರಣಿಕೆ ಒಳಗೊಂಡ ಈ ಪ್ರತಿಷ್ಠಿತ ಪ್ರಶಸ್ತಿಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸ್ಥಾಪಕ ಹಾಗೂ ಹಿರಿಯ ವಿದ್ವಾಂಸ ಪ್ರೊ|| ಎಂ.ವಿ.ಸೀತಾರಾಮಯ್ಯ ಅವರ ನೆನಪಿನಲ್ಲಿ ಅವರ ಕುಟುಂಬದವರು ಸ್ಥಾಪಿಸಿದ್ದು ಪ್ರತಿ ವರ್ಷ ಕನ್ನಡ ಸಾಹಿತ್ಯಕ್ಕೆ ಉತ್ತಮ ಕೊಡುಗೆ ನೀಡಿರುವ ಸಾಹಿತಿಗೆ ನೀಡಲಾಗುತ್ತಿದೆ. ಈ ಸಮಾರಂಭದಲ್ಲಿ ಶ್ರೀಮತಿ ಬಾನುಮುಷ್ತಾಕ್ ಅವರ ಬದುಕು ಹಾಗೂ ಬರಹದ ಬಗ್ಗೆ ಆಯ್ಕೆ ಸಮಿತಿ ಸದಸ್ಯರಾದ ಡಾ. ಲಲಿತಾಂಬ ಹಾಗೂ ಡಾ. ಬೈರಮಂಗಲ ರಾಮೇಗೌಡ ಅವರು ರಸವತ್ತಾಗಿ ವಿವರಿಸಿ ಪ್ರಶಸ್ತಿ ಪುರಸ್ಕೃತರ ಸಾಧನೆಗಳನ್ನು ಎಲ್ಲರ ಗಮನಕ್ಕೆ ತಂದರು.

**ಪುಟ 5ಕ್ಕೆ**



## ಸಂಪಾದಕೀಯ

ಕರ್ನಾಟಕ ಸಾಹಿತ್ಯ ಅಕಾಡೆಮಿ ಈ ಸಾಲಿನ ಪ್ರಶಸ್ತಿಗಳನ್ನು ಘೋಷಿಸಿರುತ್ತದೆ. ಹೊಂಗನಸು ಬಳಗ ಎಲ್ಲಾ ಪುರಸ್ಕೃತರಿಗೂ ಅಭಿನಂದಿಸುತ್ತದೆ. ಪುರಸ್ಕೃತರ ಪೈಕಿ ಹೆಸರಾಂತ ಚಿಂತಕ ಡಾ. ಕೆ.ಎಸ್. ಭಗವಾನ್ ಅವರಿಗೆ ನೀಡಲಾಗಿರುವ ಪ್ರಶಸ್ತಿಯ ಬಗ್ಗೆ ಕೆಲವರು ಅಸಮಾಧಾನ ವ್ಯಕ್ತಪಡಿಸುರುವುದಲ್ಲದೇ ಡಾ. ಕೆ.ಎಸ್. ಭಗವಾನ್ ಅವರಿಗೂ ಹಾಗೂ ಅಕಾಡೆಮಿಯ ಪ್ರಮುಖರಿಗೂ ದೂರವಾಣಿ ಕರೆ ಮಾಡಿ ಹೆದರಿಸುವ ಪ್ರಯತ್ನ ಮಾಡಿರುವುದು ಹೇಯ ಕೃತ್ಯ ಹಾಗೂ ಖಂಡನೀಯ. ಕಳೆದ ತಿಂಗಳು ನಾಡಿನ ಹಿರಿಯ ಚಿಂತಕರಾಗಿದ್ದ ಪ್ರೊ. ಎಂ.ಎಂ. ಕಲಬುರ್ಗಿ ಅವರ ಹತ್ಯೆ ಎಲ್ಲರಿಗೂ ಬಹಳ ನೋವು ತಂದಿರುತ್ತದೆ. ನಾಡು ನುಡಿ, ಸಂಸ್ಕೃತಿಗಳ ಬಗ್ಗೆ ಕಳಕಳಿ ಇಟ್ಟುಕೊಂಡು ತಮ್ಮ ವಿದ್ಯೆ ಮತ್ತು ಅನುಭವಗಳನ್ನು ಜೊತೆಗೂಡಿಸಿ ಚಿಂತನೆ ನಡೆಸಿ ಒಂದು ಸಿದ್ಧಾಂತವನ್ನು ಪ್ರತಿಪಾದಿಸಿರುವ ಚಿಂತಕರ ಬಗ್ಗೆ ಗೌರವ ಹೊಂದಿ ಅಂತಹ ಸಿದ್ಧಾಂತದ ಬಗ್ಗೆ ಎದುರುವಾದವಿದ್ದಲ್ಲಿ ಅದನ್ನು ಸೂಕ್ತ ರೀತಿಯಲ್ಲಿ ಮಂಡಿಸುವುದು ಇತರ ಚಿಂತಕರ ಜವಾಬ್ದಾರಿ. ಬದಲಿಯಾಗಿ ಅವರನ್ನು ವೈಯಕ್ತಿಕವಾಗಿ ದೂಷಿಸಿ ಹೆದರಿಸುವ ಪ್ರಯತ್ನಗಳನ್ನು ಮಾಡುವುದು ಸೂಕ್ತವಲ್ಲ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹಿಂದಿನ ಕಾರ್ಯಕಾರಿ ಸಮಿತಿಯ ಸದಸ್ಯ ಹಾಗೂ ಹೆಸರಾಂತ ಸಂಶೋಧಕ ಪ್ರೊ. ಜಿ ಅಶ್ವತ್ಥನಾರಾಯಣ ಅವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ನೀಡಲಾಗುತ್ತಿದೆ. ಅವರಿಗೆ ನಮ್ಮೆಲ್ಲರ ಅಭಿನಂದನೆಗಳು.

**ಬಿಆರ್ ರವೀಂದ್ರನಾಥ್**
ಸಂಪಾದಕರು

## ಅಕ್ಟೋಬರ್ 2015ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

**9–10–2015 ಶುಕ್ರವಾರ ಸಂಜೆ 6 ಗಂಟೆಗೆ**
**ಸ್ಥಳ : ಅಕ್ಕರಗೊಟ್ಟಿ**
**ಡಾ. ಆರ್.ಲಕ್ಷ್ಮಿನಾರಾಯಣ**
ಪಂಪ ಭಾರತದ ಪದ್ಯದ (ಆಶ್ವಾಸ 12 ಪದ್ಯ 56) ಪಾಠ ಹಾಗೂ ಅರ್ಥಜಿಜ್ಞಾಸೆ. ವಿವರಗಳನ್ನು ಪುಟ 6ರಲ್ಲಿ ನೋಡಿ.

**15–10–2015 ಗುರುವಾರ ಸಂಜೆ 6 ಗಂಟೆಗೆ**
ಸ್ಥಳ : ಎಂ.ವಿ.ಸೀ ಸಂಭಾಗಣ ಬಿ.ಎಂ.ಶ್ರೀ ಕಲಾಭವನ
**ಸಂಸ್ಕೃತಿ ದರ್ಶನ– ಸಾಕ್ಷ್ಯಚಿತ್ರ**
**ಹರಿಹರ, ರಾಘವಾಂಕ**

**18–10–2015 ಭಾನುವಾರ ಬೆಳಿಗ್ಗೆ 10.30 ಕ್ಕೆ**
**ಸ್ಥಳ :ಎಂ.ವಿ.ಸೀ ಸಂಭಾಗಣ ಬಿ.ಎಂ.ಶ್ರೀ ಕಲಾಭವನ ಕವಿಗೋಷ್ಠಿ**
ಪ್ರತಿಷ್ಠಾನದ ಸದಸ್ಯರ ಸ್ವ–ವಿರಚಿತ ಕವನಗಳ ವಾಚನ

**25–10–2015 ಭಾನುವಾರ ಬೆಳಿಗ್ಗೆ 10.30 ಕ್ಕೆ**
ಸ್ಥಳ: ಶ್ರೀ ಚಿದಂಬರೇಶ್ವರ ಉಚಿತ ಗ್ರಂಥಾಲಯ, ತುರುವೇಕೆರೆ.
ಶ್ರೀ ಚಿದಂಬರೇಶ್ವರ ಉಚಿತ ಗ್ರಂಥಾಲಯ, ತುರುವೇಕೆರೆ, ಸಹಯೋಗದಲ್ಲಿ
**ಉಪನ್ಯಾಸ : ಪ್ರೊ. ಜಿ. ಅಶ್ವತ್ಥನಾರಾಯಣ**
ವಿಷಯ : ಬೇಟೆರಾಯ ದೀಕ್ಷಿತರ ಕೃತಿಗಳು

**29–10–2015 ಗುರುವಾರ ಸಂಜೆ 6 ಗಂಟೆಗೆ**
ವಚನ ವಿಹಾರ, ಸಂಗೀತಾತ್ಮಕ ಸಾಕ್ಷ್ಯ ಚಿತ್ರ ಪ್ರದರ್ಶನ

## ಅಕ್ಕರ ಗೊಟ್ಟಿ – ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ–4

11ನೇ ಸೆಪ್ಟೆಂಬರ್ 2015 ಶುಕ್ರವಾರ ಸಂಜೆ: 5.30 ರಿಂದ 7
ವಿಷಯ : **ಸಾಹಿತ್ಯ– ಒಂದು ಮರುವ್ಯಾಖ್ಯೆ**
ಮಂಡನೆ : **ಅಶ್ವತ್ಥನಾರಾಯಣ ಶಾಸ್ತ್ರಿ– (ನೈಷಧ್ಯಂ.)**



ಅಕ್ಕರಗೊಟ್ಟಿ ಇದು ಒಂದು ಸಾಂಸ್ಕೃತಿಕ ಚಿಂತನ ಗೋಷ್ಠಿ ನಡೆಯಿತು. ಸಾಹಿತ್ಯ– ಒಂದು ಮರುವ್ಯಾಖ್ಯೆ ಎಂಬ ವಿಷಯವನ್ನು ನೈಷಧಂ ಎಸ್ಸೆ ಮಂಡನೆ ಮಾಡಿದರು ಮತ್ತು ಈ ಕುರಿತ ಚರ್ಚೆ ನಡೆಯಿತು.

ಸಾಹಿತ್ಯ ಒಂದು ಮರುವ್ಯಾಖ್ಯೆ ಎಂದಿದ್ದೇವೆ. ಏನು ಈ ಮರುವ್ಯಾಖ್ಯೆ? ಯಾಕೆ? ಸ್ವಲ್ಪ ವಿಚಾರ ಮಾಡೋಣ.

ಸಾಹಿತ್ಯ ಎಂದರೇನು? ಸಾಹಿತ್ಯದಿಂದ ಆಗುವ ಪ್ರಯೋಜನ ಏನು? ಕಾವ್ಯ ಎಂದರೇನು? ಸಾಹಿತ್ಯದಲ್ಲಿ ಶ್ರೇಷ್ಠತೆ ಎಂತಹುದು? ಇಂತಹ ಚರ್ಚೆಗಳು ಕಾಲದಿಂದ ಕಾಲಕ್ಕೆ ಆಗುತ್ತಲೇ ಬರುತ್ತಿವೆ. ನಿಜವಾದ ಸಾಹಿತ್ಯ ಯಾವ ಹಂಗೂ ಇಲ್ಲದೆ ಮರುಹುಟ್ಟು ಪಡೆಯುತ್ತಾ, ಸಮಕಾಲೀನವಾಗುತ್ತಾ, ಆಯಾ ಕಾಲಕ್ಕೆ ಪ್ರಸ್ತುತವಾಗುತ್ತಾ, ಆಯಾ ಕಾಲಕ್ಕೆ ಪ್ರಸ್ತುತವಾಗುತ್ತಾ ಬರುತ್ತಲೇ ಇದೆ. ಭಾಷೆಯ ರೂಪ, ಸಾಹಿತ್ಯದ ಸತ್ವ ನಿಂತ ನೀರಲ್ಲ. ಅದು ವೇಷ ಬದಲಿಸಿದರೂ ಮೂಲ ದ್ರವ್ಯವನ್ನು ಕಳೆದುಕೊಳ್ಳದೆ ಆಯಾ ಕಾಲಕ್ಕೆ ಒದಗುತ್ತಲೇ ಇದೆ. ಉದಾಹರಣೆಗೆ, ಎ.ಕೆ ರಾಮಾನುಜನ್‌ರ ಲೇಖನ, Three Hunred Ramayanas: Five examples and three thoughts on translation ನೆನಪಿಸಿಕೊಳ್ಳಬಹುದು.

ಮಾನವನ ಮೂಲ ಸ್ವಭಾವಕ್ಕೆ ಸಂಬಂಧಿಸಿದ ಸಾಹಿತ್ಯ, ತನ್ನ ದ್ರವ್ಯವನ್ನು ಹೊತ್ತು, ಕಾಲದೊಂದಿಗೆ ಬದಲಾಗುವ ಭಾಷೆ, ಸಾಹಿತ್ಯದ ರೂಪಗಳ ಮೂಲಕ ಸಮಾಜಕ್ಕೆ ದಕ್ಕುತ್ತಲೇ ಹೋಗುತ್ತದೆ.ಇದು ಒಂದು ಮುಖ್ಯ ಆಯಾಮ.

ಇನ್ನೊಂದು–

ಇಂದು ಪ್ರಪಂಚ ಅತಿ ವೇಗದ, ಎಂದೂ ಇಲ್ಲದ ಒಂದು ಹೊಸ ಸನ್ನಿವೇಶದಲ್ಲಿ ಸಿಲುಕಿ ಕೊಂಡಿದೆ. ಈ ವಿಜ್ಞಾನ–ತಂತ್ರಜ್ಞಾನದ ಯುಗ ಅನೇಕ ಪಲ್ಲಟಗಳನ್ನು ಸೃಷ್ಟಿಸಿದೆ. ಉದಾ: ವಿಸ್ತಾರವಾಗುತ್ತಿರುವ ಈ ವಿಶ್ವ, ಮೂಲಭೂತ ಶಕ್ತಿಗಳ (Fundamental forces like Gravity, light, Electricity etc) ಕುರಿತ ಗ್ರಹಿಕೆಗಳು, ನ್ಯಾನೊತಂತ್ರಜ್ಞಾನ ಸಂಬಂಧವಾದ ಸಂವಹನ, ಮಾಧ್ಯಮಗಳ ಪ್ರಭಾವ; ಹಾಗೆಯೇ ಬೃಹತ್ ವಿಶ್ವ ಕುರಿತ ತಿಳುವಳಿಕೆಗಳು, ಉದಾ: ವೈದ್ಯಶಾಸ್ತ್ರದಲ್ಲಿ ಆಗಿರುವ ಅಪರಿಮಿತ ಬೆಳವಣಿಗೆಗಳು; ಒಂದೇ ಎರಡೇ?

ಈ ಎಲ್ಲವೂ ಪ್ರಪಂಚವನ್ನು ಕುಗ್ಗಿಸಿವೆ. ಇದು ಮಾನವನ ನಂಬಿಕೆಗಳ ಮೇಲೆ ಅಪಾರವಾದ ಪ್ರಭಾವ ಬೀರಿವೆ. ನಮ್ಮ ಜೀವನ ಶೈಲಿ ಇನ್ನಿಲ್ಲದಂತೆ ಬದಲಾಗಿದೆ. ದೇವರು, ಧರ್ಮ, ಜ್ಯೋತಿಷ್ಯ, ವಾಸ್ತು, ಸ್ವರ್ಗ, ನರಕ– ಇಂತಹ ನಂಬಿಕೆಗಳ ಬುಡವನ್ನೇ ಅಲುಗಾಡಿಸುತ್ತಿವೆ. ಕೆಲವು ಹೊಸ ಮೌಲ್ಯಗಳು ಹುಟ್ಟಿಕೊಳ್ಳುತ್ತಿವೆ.

ಹೀಗಿದ್ದೂ, ಕೆಲವೊಮ್ಮೆ ನಾವು ಕೂಪಮಂಡೂಕಗಳಾಗುತ್ತಿದ್ದೇವೆಯೇ ಎಂಬ ಸಂಶಯ ಉಂಟಾಗುತ್ತದೆ. ಇದು ಶಿಷ್ಟ, ಇದು ಪರಿಶಿಷ್ಟ, ಇದು ಜಾನಪದ, ಇದು ಹಳೆಗನ್ನಡ, ಇದು ನನಗೆ ಸಂಬಂಧವಿಲ್ಲ ಎನ್ನುವ ಹಾಗೆ ನಾವು ಸಾಹಿತ್ಯವನ್ನು ಕಾಣುತ್ತಿದ್ದೇವೆಯೆ? ಎಂಬ ಅನುಮಾನ ಬರುತ್ತಿದೆ.

ಆದ್ದರಿಂದ, ಸಮಕಾಲೀನ ನೈಜ ಸ್ಥಿತಿಗಳು, ನೂತನ ಸತ್ಯಗಳ ಅರಿವಿನ ಮಧ್ಯೆ ನಾವು ಹೇಗೆ ದಾರಿಗಳನ್ನು ಕಂಡು ಕೊಳ್ಳಬೇಕು ಎಂಬಂತಹ ಚಿಂತನೆಗಳನ್ನು ಮಥಿಸಬೇಕಾಗಿರುತ್ತದೆ.

ಹೀಗಾಗಿ ಈ ಚರ್ಚೆಯು ತುಂಬ ಉಪಯುಕ್ತವಾಗಿ ಚಿಂತನೆಗಳ ಕಡೆತದಿಂದ ಹೊಸ ಆಲೋಚನೆಗಳಿಗೆ ಎಡೆಗೊಟ್ಟಿತು. ಚರ್ಚೆಯಲ್ಲಿ ಡಾ. ನಳಿನಿ ವೆಂಕಟೇಶ್, ಡಾ. ನಳಿನಿ ವೆಂಕಟೇಶ್, ಡಾ. ಜಯಮ್ಮ ಕರಿಯಣ್ಣ, ಡಾ.ಪಿ.ವಿ. ನಾರಾಯಣ, ಪ್ರೊ|| ಅಬ್ದುಲ್ ಬಷೀರ್, ರವೀಂದ್ರನಾಥ್, ರಾಮಪ್ರಸಾದ್ ಮುಂತಾದವರು ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಗೊಳಿಸಿದರು.

## ಹಸ್ತಪ್ರತಿ ಸಂಗ್ರಹಾಲಯಕ್ಕೆ ಪದವಿ ಕಾಲೇಜು ವಿದ್ಯಾರ್ಥಿಗಳ ಭೇಟಿ- 15-9-2015

ಬಿ.ಎಂ. ಎಸ್. ಮಹಿಳಾ ಪದವಿ ಕಾಲೇಜ್‌ನ ವಿದ್ಯಾರ್ಥಿಗಳು ದಿನಾಂಕ 15-9-2015 ರಂದು ಬಿ. ಎಂ. ಶ್ರೀ. ಪ್ರತಿಷ್ಠಾನದ ಹಸ್ತಪ್ರತಿ ಸಂಗ್ರಹಾಲಯಕ್ಕೆ ಭೇಟಿನೀಡಿ, ನಮ್ಮ ಪ್ರತಿಷ್ಠಾನದಲ್ಲಿರುವ ವಿವಿಧ ಲಿಪಿಗಳ, ಭಾಷೆಗಳ, ವಿವಿಧ ವಿಷಯಗಳನ್ನೊಳಗೊಂಡ ಕೆಲವು ಹಸ್ತಪ್ರತಿಗಳನ್ನು ಬಹಳ ಆಸಕ್ತಿಯಿಂದ ವೀಕ್ಷಿಸಿದರು. ವಿದ್ಯಾರ್ಥಿಗಳಿಗೆ ಪ್ರಾಚೀನ ಲೇಖನ ಸಾಮಗ್ರಿಗಳ ಉಗಮ, ಅವುಗಳು ಭಾರತಕ್ಕೆ ಬಂದ ಮಾರ್ಗಗಳು ಮತ್ತು ಭಾರತ ದೇಶಕ್ಕೆ ತಾಳೆಗರಿ ತನ್ನ ಬಾಹುಳ್ಯದಿಂದ ಅನುಕೂಲವಾಗಿಯೂ ಮತ್ತು ಹೆಚ್ಚು ಪ್ರಯೋಜನಕಾರಿಯಾಗಿ ಒದಗಿದ ರೀತಿಯನ್ನು ಶ್ರೀ ಗುರುಪ್ರಸಾದ್‌ರವರು ಪರಿಚಯ ಮಾಡಿಕೊಟ್ಟರು. ಪ್ರಸ್ತುತ ಸೂಚಿ ತಯಾರಿಕೆ ಕಾರ್ಯ ನಡೆಯುತ್ತಿರುವುದರಿಂದ, ಗ್ರಂಥಗಳಲ್ಲಿರುವ ವಿಷಯವನ್ನು ಸಂಕ್ಷಿಪ್ತವಾಗಿ ತಿಳಿಸುವ ಸೂಚಿ (catalgoue) ಯನ್ನು ತಯಾರಿಸಿದರೆ, ಹಸ್ತ ಪ್ರತಿಗಳ ಸ್ವರೂಪ, ಪಾಠಗಳ ಮಾಹಿತಿ ಮತ್ತು ವಿಶೇಷತೆಯನ್ನು ತಿಳಿಯಲು ಅಧ್ಯಯನಕಾರರಿಗೆ ಬಹಳ ಅನುಕೂಲವಾಗುವ ಬಗ್ಗೆ ಮಾಹಿತಿ ನೀಡಲಾಯಿತು. ಹದಿಮೂರು ವಿದ್ಯಾರ್ಥಿಗಳ ಈ ತಂಡದ ಭೇಟಿಯನ್ನು ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥೆ ಡಾ॥ ಶೀಲಾದೇವಿ ಎಸ್.ಮಳಿಮಠ್ ಮತ್ತು ಶ್ರೀ ಮನೋಜ್, ಉಪನ್ಯಾಸಕರು ಇವರುಗಳು ಆಯೋಜಿಸಿದ್ದರು. ಹಸ್ತಪ್ರತಿ ವಿಭಾಗದ ಸಂರಕ್ಷಕರು ಶ್ರೀಗುರುಪ್ರಸಾದ್ ಅವರು ಈ ಬೇಟಿಯನ್ನು ಸಂಯೋಜಿಸಿ ಯಶಸ್ವಿಯಾಗಿ ನಡೆಸಿಕೊಟ್ಟರು.

## ಬಿಎಂಶ್ರೀ ಕಲಾ ಭವನ

150 ಜನರಿಗೆ ಸ್ಥಳಾವಕಾಶ ಧ್ವನಿ, ಬೆಳಕು, ಪ್ರೊಜೆಕ್ಟರ್ ಸೌಲಭ್ಯಗಳು ಇರುವ ಬಿಎಂಶ್ರೀ ಕಲಾ ಭವನ ಸಾಹಿತ್ಯ - ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಲಭ್ಯವಿದೆ.ಉಪನ್ಯಾಸ, ವಿಚಾರಗೋಷ್ಠಿ, ಪುಸ್ತಕ ಬಿಡುಗಡೆ, ಕವಿಗೋಷ್ಠಿ, ಸಭೆ, ಸಂವಾದ, ಸಂಗೀತ, ನೃತ್ಯ, ಮುಂತಾದ ವೈವಿಧ್ಯಮಯ ಕಾರ್ಯಕ್ರಮಗಳಿಗೆ ಸಾಹಿತ್ಯಾಸಕ್ತರು, ಸಂಘ ಸಂಸ್ಥೆಗಳು ಪಡೆಯಬಹುದು. ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಿ.

## ಬೊಮ್ಮನಹಳ್ಳಿಯ ಕಿಂದರಜೋಗಿ ಪದ್ಯದ ಗಾಯನ



ಭಾನುವಾರ27-09-2015 ಬೆಳಿಗ್ಗೆ 10-30ಗಂಟೆ **ಶಾರದಾ ಹನುಮಯ್ಯ ದತ್ತಿ ಕಾರ್ಯಕ್ರಮದಡಿಯಲ್ಲಿ** ಕುವೆಂಪು ವಿರಚಿತ **ಬೊಮ್ಮನಹಳ್ಳಿಯ ಕಿಂದರಜೋಗಿ** ಪದ್ಯದ ಗಾಯನ/ವಾಚನ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಈ ಗಾಯನ ಕಾರ್ಯಕ್ರಮದಲ್ಲಿ ಕೇತನ್ ಎ ಜೈನ್ ಹಾಗೂ ಕಾಂಚನ್ ಎ ಜೈನ್ ಅವರಿಗೆ ಸ್ಮರಣಿಕೆ ಹಾಗೂ ಪುಸ್ತಕಗಳನ್ನು ನೀಡಲಾಯಿತು. ಶ್ರೀ ಗುರುಪ್ರಸಾದ್ ಅವರು **ಬೊಮ್ಮನಹಳ್ಳಿಯ ಕಿಂದರಜೋಗಿ** ಪದ್ಯವನ್ನು ಓದುವ ರೀತಿಯನ್ನ ತಿಳಿಸಿಕೊಟ್ಟರು.

## ಅಭಿನಂದನೆಗಳು



ಕಲ್ಯಾಣ ಕರ್ನಾಟಕದ ಪ್ರಮುಖ ಮಠಗಳಲ್ಲಿ ಒಂದಾದ ಹಾರಕೂಡ ಸಂಸ್ಥಾನದಿಂದ ಕೊಡಮಾಡುವ ಶ್ರೀ **ಚನ್ನರೇಣುಕ ಬಸವ ಪ್ರಶಸ್ತಿ**ಯನ್ನು ಪ್ರಸಿದ್ಧ ಶಾಸನ ತಜ್ಞ, ಸಂಸ್ಕೃತಿ ಸಂಶೋಧಕರಾದ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸದಸ್ಯರಾದ, ದಿ. ಮಿಥಿಕ್ ಸೊಸೈಟಿ ಕಾರ್ಯಕಾರಿ ಸಮಿತಿ ಸದಸ್ಯರಾದ, ನಮ್ಮೆಲರಿಗೂ ಆತ್ಮೀಯರಾದ ಡಾ.ಎಂ.ಜಿ. ನಾಗರಾಜ್ ಅವರಿಗೆ ಲಭಿಸಿದೆ. ಈ ಪ್ರತಿಷ್ಠಿತ ಪ್ರಶಸ್ತಿಯು ರೂ.50 ಸಾವಿರ ನಗದು, ಒಂದುತೊಲ ಚಿನ್ನದ ಪದಕ ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ.

ಡಾ. ಎಂ.ಜಿ. ನಾಗರಾಜ್ ಅವರಿಗೆ ನಮ್ಮೆಲ್ಲರ ಅಭಿನಂದನೆಗಳು

# ಹಳಗನ್ನಡ ತರಗತಿಗಳ ಸಮಾರೋಪ ಸಮಾರಂಭ

ಜೂನ್ 2015 ರಿಂದ ಆಗಸ್ಟ್ 2015 ರವರೆಗೆ ನಡೆದ ಹಳಗನ್ನಡ ಕಾವ್ಯಶಿಬಿರದ ಸಮಾರೋಪ ಸಮಾರಂಭವು ದಿನಾಂಕ 4–09–2015 ರಂದು ಅಕ್ಕರಗೊಟ್ಟಿ ಮಾತಿನ ಮನೆಯಲ್ಲಿ ಆಯೋಜಿಸಲಾಗಿತ್ತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ ಪಿ.ವಿ. ನಾರಾಯಣರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶಿಬಿರದ ಉಪನ್ಯಾಸಕರಾಗಿ ಕಾರ್ಯನಿರ್ವಹಿಸಿದ ಡಾ॥ ಕೆ. ಆರ್. ಗಣೇಶ್ ಮತ್ತು ಪ್ರೊ॥ಕೆ.ಎಸ್. ಮಧುಸೂಧನ ಅವರು ಆಗಮಿಸಿದ್ದರು. ಶಿಬಿರದ ವಿದ್ಯಾರ್ಥಿಗಳಲ್ಲದೆ, ಇತರರೂ ಸಹ ಕಾರ್ಯಕ್ರಮಕ್ಕೆ ಆಗಮಿಸಿದ್ದರು. ಸ್ವಾಗತ ಕೋರಿ, ಪ್ರಾಸ್ತಾವಿಕ ನುಡಿಗಳನ್ನಾಡಿದ ಡಾ॥ ಪಿ. ವಿ. ನಾರಾಯಣರವರು ಹಳಗನ್ನಡ ಕಾವ್ಯಾಭ್ಯಾಸ ಶಿಬಿರವು, ಪ್ರತಿಷ್ಠಾನದ ಒಂದು ಮುಖ್ಯ ಚಟುವಟಿಕೆ ಹಾಗೂ ಶಿಬಿರದ ಉದ್ದೇಶ ಹಳಗನ್ನಡ ಕಾವ್ಯಗಳ ಓದು, ಅರ್ಥಗ್ರಹಿಕೆ, ಬೋದನೆ ಮತ್ತು ಅಧ್ಯಯನಗಳ ಅನುಕೂಲಕ್ಕಾಗಿ, ಅಭ್ಯಾಸ ತರಗತಿಗಳಂತೆ ನಡೆಸಲಾಗುತ್ತಿದೆ ಎಂಬ ವಿಚಾರವನ್ನು ತಿಳಿಸಿದರು. ಇದೇ ಮೊದಲ ಸಲುವಾಗಿ ಈ ಶಿಬಿರದಲ್ಲಿ ಎಂಟು ಕಾವ್ಯಭಾಗಗಳನ್ನು ಪಠ್ಯವಾಗಿ ಆಯ್ಕೆಮಾಡಿದೆ ಎಂದು ತಿಳಿಸಿದರು. ಇದರ ಪ್ರಯೋಜನ ಪಡೆದ ವಿದ್ಯಾರ್ಥಿಗಳನ್ನು ಅಭಿನಂದಿಸಿದರು.

ನಂತರ ವಿದ್ಯಾರ್ಥಿಗಳಿಗೆ ಪ್ರಮಾಣ ಪತ್ರಗಳನ್ನು ಡಾ॥ ಗಣೇಶ ಮತ್ತು ಪ್ರೊ॥ ಮಧುಸೂದನ್ ಅವರು ವಿತರಿಸಿದರು.

ಡಾ॥ ಗಣೇಶ್ ಅವರು ಪ್ರತಿಷ್ಠಾನದಲ್ಲಿ ಹಳಗನ್ನಡ ಕಾವ್ಯಾಸಕ್ತರ ಕಾವ್ಯಾಭ್ಯಾಸ ಶಿಬಿರದ ಆರಂಭದಿಂದಲೂ ತಮ್ಮನ್ನು ತೊಡಗಿಸಿಕೊಂಡ ದಿನಗಳನ್ನು ನೆನಪಿಸಿಕೊಂಡು, ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುವ ಪ್ರವೃತ್ತಿ ತಮಗೆ ಬಹಳವಾಗಿ ಆನಂದ ನೀಡುವ ಕಾಯಕವಾಗಿದೆ, ಹಾಗೂ ಸದಾ ಕ್ರಿಯಾಶೀಲ ಬದುಕನ್ನು ರೂಡಿಸಿಕೊಂಡು ಬರಲು ಸಾಧ್ಯವಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಪ್ರೊ॥ ಕೆ.ಎಸ್. ಮಧುಸೂಧನ್ ಅವರು ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡುತ್ತಾ, ವಿದ್ಯಾರ್ಥಿಗಳು ನಿರಂತರವಾಗಿ ಪದವಿಭಾಗ ಮಾಡುವ ಕ್ರಮ, ಅರ್ಥೈಸುವಿಕೆ, ನಿಘಂಟಿನ ಬಳಕೆ, ಈ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವಂತೆ ಸಲಹೆ ನೀಡಿದರು. ಹಾಗೂ ತಮ್ಮ ಸಹಾಯವನ್ನೂ ಬಳಿಸಿ ಕೊಳ್ಳಬಹುದೆಂದು ತಿಳಿಸಿದರು.

ವಿದ್ಯಾರ್ಥಿಗಳ ಪರವಾಗಿ ಶ್ರೀಮತಿ ಅಂಬಿಕಾ, ನಳಿನಾ ಮತ್ತು ಶಶಿಕಲಾ ಇವರುಗಳು ಮಾತನಾಡಿ ತಮ್ಮ ಕಾಲೇಜಿನ ದಿನಗಳನ್ನು ಪುನಃ ಈ ಕಾವ್ಯಾಭ್ಯಾಸ ತರಗತಿಯಲ್ಲಿ ಕಂಡು ಕೊಂಡ ಅನುಭವವನ್ನು ಹಂಚಿಕೊಂಡರು.

ಪ್ರೊ॥ ಅಬ್ದುಲ್ ಬಷೀರ್, ಕಾರ್ಯದರ್ಶಿಗಳ ವಂದನಾರ್ಪಣೆಯೊಂದಿಗೆ ಶಿಬಿರದ ಸಮಾರೋಪ ಸಮಾರಂಭವು ಮುಕ್ತಾಯಗೊಂಡಿತು.

---

**ಮೊದಲನೇ ಪುಟದಿಂದ**

ಶ್ರೀಮತಿ ಬಾನುಮುಷ್ತಾಕ್ ಅವರು ಮಾತನಾಡಿ ತಮ್ಮ ಕೆಲವು ಅನುಭವಗಳನ್ನು ಹಂಚಿಕೊಂಡು ಪ್ರಶಸ್ತಿಯನ್ನು ನೀಡಲು ಸಹಕರಿಸಿದ ಎಲ್ಲರಿಗೂ ವಂದಿಸಿದರು. ಡಾ. ಕೆ. ಮರುಳಸಿದ್ದಪ್ಪ ಅವರು ಮಾತನಾಡಿ ಒಬ್ಬ ಮಹಿಳೆಯಾಗಿ ವಿದ್ಯಾವಂತಳಾಗಿ ಪತ್ರಕರ್ತೆಯಾಗಿ ನ್ಯಾಯವಾದಿಯಾಗಿ ಸಾಹಿತಿಯಾಗಿರುವುದೇ ಬಂಡಾಯದ ಸಂಕೇತವಾಗುತ್ತದೆ. ಆ ನಂತರ ಸಾಹಿತ್ಯದಲ್ಲಿ ಬಂಡಾಯ ಪ್ರದರ್ಶಿಸುವ ಹೆಜ್ಜೆ ಬರುತ್ತದೆ ಎಂದು ಹೇಳಿ ಶ್ರೀಮತಿ ಬಾನುಮುಷ್ತಾಕ್ ಅವರಿಗೆ ಅಭಿನಂದಿಸಿದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಅಧ್ಯಕ್ಷ ಪ್ರೊ. ಎಂ. ಎಚ್. ಕೃಷ್ಣಯ್ಯ ಉಪಸ್ಥಿತರಿದ್ದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ. ಪಿ. ವಿ. ನಾರಾಯಣ ಸ್ವಾಗತ ಬಯಸಿ ಪ್ರಶಸ್ತಿಯ ಹಿನ್ನಲೆ ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಚಟುವಟಿಕೆಗಳನ್ನು ವಿವರಿಸಿದರು. ಖಜಾಂಚಿ ಹಾಗೂ ಪ್ರೊ॥ ಎಂ.ವಿ.ಸೀತಾರಾಮಯ್ಯ ಅವರ ಪುತ್ರ ಶ್ರೀ ರಾಮ**ಪ್ರಸಾದ್ ವಂದನಾರ್ಪಣೆ ಮಾಡಿದರು.** ಗೌರವ ಕಾರ್ಯದರ್ಶಿ ಶ್ರೀ ರವೀಂದ್ರನಾಥ್ ನಿರೂಪಣೆ ಮಾಡಿದರು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

## ಸಾಕ್ಷ್ಯಚಿತ್ರ ಪ್ರದರ್ಶನ

ವಿದ್ಯುತ್ ಪೂರೈಕೆಯಲ್ಲಿ ಇದ್ದ ಅನಿಶ್ಚತೆಯ ಕಾರಣದಿಂದ ದಿನಾಂಕ 14–09–2015ರಂದು ಏರ್ಪಡಿಸಲಾಗಿದ್ದ ಸಾಕ್ಷ್ಯಚಿತ್ರ ಪ್ರದರ್ಶನವನ್ನು ರದ್ದುಗೊಳಿಸಲಾಯಿತು.

## ವಚನ ವಿಹಾರ

## ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

ಸೋಮವಾರ 28–09–2015 ರಂದು ಸಂಜೆ ಆರು ಗಂಟೆಗೆ ವಚನ ವಿಹಾರ – ವಚನಗಳ ಗಾಯನ ಮತ್ತು ವ್ಯಾಖ್ಯಾನಗಳನ್ನು ಒಳಗೊಂಡಿರುವ ವಿಡಿಯೋ ಚಿತ್ರಗಳ ಪ್ರದರ್ಶನ ನಡೆಯಿತು. ಸುಮಾರು ಒಂದು ಗಂಟೆಯ ಈ ಸಂಗೀತಮಯ ಕಾರ್ಯಕ್ರಮದಲ್ಲಿ ವಚನ ಚಳುವಳಿ, ಬಸವಣ್ಣ ಅವರ ಪಾತ್ರದ ಬಗ್ಗೆ ಬಹಳ ರಸವತ್ತಾಗಿ ವಿವರಿಸಲಾಗಿದ್ದು ಜೊತೆಗೆ ವಚನಗಳನ್ನು ಪ್ರಸಿದ್ಧ ಗಾಯಕರು ಇಂಪಾಗಿ ಹಾಡಿರುವ ಭಾಗಗಳೂ ಇದ್ದು ಅಧಿಕ ಸಂಖ್ಯೆಯಲ್ಲಿ ಹಾಜರಿದ್ದ ಸಭಿಕರಿಗೆ ಹೊಸ ಅನುಭವವನ್ನು ತಂದುಕೊಟ್ಟಿತು.

**9–10–2015 ಶುಕ್ರವಾರ ಸಂಜೆ 6 ಗಂಟೆಗೆ**

**ಸ್ಥಳ :ಅಕ್ಕರಗೊಟ್ಟಿ**

**ವಿಷಯ ಚಾಲನೆ :ಡಾ. ಆರ್.ಲಕ್ಷ್ಮಿನಾರಾಯಣ**

**ವಿಷಯ :ಪಂಪ ಭಾರತದ ಪದ್ಯದ (ಆಶ್ವಾಸ 12 ಪದ್ಯ 56)ಪಾಠ ಹಾಗೂ ಅರ್ಥಜಿಜ್ಞಾಸೆ.**

ನುಡಿವುದಂ ಪತಿಭಕ್ತಿಯ ಪೆಂಪಿಂ ನೀಂ ನುಡಿದೈ ಪೆಶತಂದದಿಂ।
ನುಡಿದೆಯಲ್ತೆ ಮದಾಯಮಮೋಘಂ ಸ್ಥೂವಡೆಯಲ್ಕೆನಗಕ್ಕುಮಿ॥
ನ್ನೆಡೆಯೊಳೆಂದೆಮಂದೆಂದುದದೇಂ ತಪ್ಪಾದುದೆ ನಮ್ಮೊವಜರ್ಜಸಂ।
ಬಡೆದ ಭಾರ್ಗವರಪ್ಪುದಱಿಂದಂ ನಂಟರುಮಂಗಮಹೀಪತೀ ॥॥

ನುಡಿವುದಂ– ಹೇಳುವುದನ್ನು, ನೀಂ–ನೀನು, ಪತಿಭಕ್ತಿಯ– ಸ್ವಾಮಿ ಭಕ್ತಿಯ, ಪೆಂಪಿಂ, ಪೆಂಪಿಂ– ಹಿರಿಮೆಯಿಂದ,ನುಡಿದಯ್ ಹೇಳಿದೆ; ಪೆಶತಂದದಿಂ–ಬೇರೆರೀತಿಯಿಂದ, ನುಡಿದೆಯಲ್ತೆ ಮಾತಾಡಲಿಲ್ಲವಲ್ಲವೆ?ಇಲ್ಲಿ ನುಡಿ(ಯೆ)ಯಲ್ತೆಎಂದು ಪಾಠವಿರಬೇಕೇನೊ? ಮದಾಯಂ–ನನ್ನ ಸಾಮರ್ಥ್ಯವು ಅಮೋಘಂ–ವ್ಯರ್ಥವಲ್ಲದ್ದು(ಹೀಗೆಂದು ಭೀಷ್ಮತನ್ನನ್ನುತಾನೇ ಹೊಗಳಿಕೊಳ್ಳುವನೆ? ಆದ್ದರಿಂದ ನನ್ನ ಲಾಭವು, ನನ್ನದರ್ಶನ ಲಾಭವು ವ್ಯರ್ಥವಲ್ಲದ್ದು ಎಂದಾಗಬಹುದು; ಆಯ ಶಬ್ದಕ್ಕೆ ಸಾಮರ್ಥ್ಯ ಎಂಬ ಅರ್ಥಕಾಣುವುದಿಲ್ಲ); ಸ್ಥೂವ ಸರದಿಯನ್ನು, ಪಡೆಯಲ್ಕೆ–ಪಡೆಯುವುದಕ್ಕೆ, ಎನಗೆ–ನನಗೆ,ಅಕ್ಕುಂ–ಆಗುತ್ತದೆ; ಇಂ–ಇನ್ನು, ಎಡೆಯೊಳ್–ನಡುವೆ, ಎಂದೆಂ–ಎಂದು ಹೇಳಿದನು; ಅದೆಂದುದು–ಹೇಳಿದ ಆ ಮಾತು, ಅದೇಂ–ಅದೇನು, ತಪ್ಪಾದುದೆ–ತಪ್ಪಾಯಿತೆ? ನಮ್ಮೊವಜರ್–ನಮ್ಮಿಬ್ಬರ ಗುರುಗಳು, ಜಸಂ ಬಡೆದ–ಕೀರ್ತಿವಂತರಾದ, ಭಾರ್ಗವರ್–ಪರಶುರಾಮರು, ಅಪ್ಪುದರೆಂದಂ–ಆಗಿರುವುದರಿಂದ, ಅಂಗಮಹೀಪತೀ– ಕರ್ಣನೆ, ನಂಟ(ರೆಂ)–ನಾವು ನಂಟರಾಗಿದ್ದೇವೆ.

---

## ಶಾಶ್ವತ ನಿಧಿ

**ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ**

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ , ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದುಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ.

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ. ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ.ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ.

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ.

ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

ಶಾಶ್ವತ ನಿಧಿಗೆ ಜೂನ್ 2015 ರಲ್ಲಿ ಕಾಣಿಕೆ ನೀಡಿರುವವರ ಪಟ್ಟಿ

ಡಾ. ಪಿ.ವಿ.ನಾರಾಯಣ, ಶ್ರೀ ಎಂ ಎಸ್ ರಾಮಪ್ರಸಾದ್ ಶ್ರೀ ಡೀ.ನಂ.ವೆಂಕಟರಮಣಯ್ಯ ಹಾಗೂ ಶ್ರೀ ಗುರುಪ್ರಸಾದ್

ಇಲ್ಲಿಯವರೆಗೆ ಸಂಗ್ರಹಿಸಲಾದ ಮೊತ್ತ ರೂ. 14.40 ಲಕ್ಷ

# ಪದಚರಿತೆ

## ಒಂದಿಷ್ಟು ಪದಗಳ ಮೂಲಚೂಲಗಳ ಹುಡುಕಾಟ

– ಡಾ॥ ಪಿ.ವಿ. ನಾರಾಯಣ

**ಅಡಕೆ:** ತೆಂಗಿನ ಜಾತಿಗೆ ಸೇರಿದ ಮರ ಮತ್ತದರ ಕಾಯಿಯ ಹೆಸರಿದು. ಅಡಿಕೆ ಎಂಬ ರೂಪವೂ ಬಳಕೆಯಲ್ಲಿದೆ. ಕ್ರಿಸ್ತಶಕದ ಆರಂಭದ ಹೊತ್ತಿಗೇ ಮಲೇಷಿಯ ಕಡೆಯಿಂದ ಈ ಸಸ್ಯ ನಮ್ಮ ದೇಶಕ್ಕೆ ಬಂತು; ಅಲ್ಲಿನ ಭಾಷೆಯಲ್ಲಿ ಇದನ್ನು 'ಅಹ್ ಡಕ' ಎನ್ನುತ್ತಿದ್ದರು; ಇದುಬಿಜಿಎಲ್‌ಸ್ವಾಮಿಯವರಹೇಳಿಕೆ. ಇದೇ ಕನ್ನಡದಲ್ಲಿ ಅಡಕೆಯಾಯಿತು. ಕ್ರಿಶ. 800 ರ ಕನ್ನಡಶಾಸನವೊಂದರಲ್ಲಿ "ಅಡಕೆಯಪೇಱಿಂಗೆ ಮೂನೂಱು" ಎಂಬ ಪ್ರಯೋಗವಿದೆ. ಇಕ್ಕಟ್ಟಿನ ಸ್ಥಿತಿಯನ್ನು 'ಧರ್ಮಾಮೃತ'ದಲ್ಲಿ "ಪಲ್‌ಸಂದಿಯಡಕೆಯಂತೆ" ಎಂದು ವರ್ಣಿಸಲಾಗಿದೆ. ಅಡಕೆಯನ್ನು ವ್ಯಾಪಕವಾಗಿ ಬೆಳೆಸುತ್ತಿದ್ದರು, ಬಳಸುತ್ತಿದ್ದರು. 'ಅಡಕೆದೋಂಟ'ದ ಪ್ರಸ್ತಾಪ ಹನ್ನೊಂದನೆಯ ಶತಮಾನದ ಶಾಸನದಲ್ಲಿ ಬಂದಿದೆ ("ಆ ಕೆಱೆಯ ಕೆಳಗಣದಡಕೆದೋಂಟ ಮತ್ತರೆರಡು"). ತಾನಾಗಿ ಉದುರಿದ ಅಡಕೆ ಕಾಯಿಗಳನ್ನು 'ಕದರಡಕೆ' ಎಂಬ ಮಾತಿನಲ್ಲಿ ಸೂಚಿಸಲಾಗುತ್ತದೆ. ಕುವೆಂಪು ಅವರ ಈ ಹೆಸರಿನ ಕವನಸಂಕಲನವೊಂದಿದೆ.

ಎಲೆಯಡಿಕೆ ಸಾಮಾನ್ಯವಾದ ಜೋಡಿ ಪದ. "ಅವಜವೇಲಿರ್ದೆಲೆಯಡಕೆಯುಮಂ ... ಕೊಳಲಿಂಬಪ್ಪಂತಿರೆಮಾಡಿ" ಎಂಬುದು 'ಪಂಪಭಾರತ'ದ ಮಾತು. ಅಡಕೆಗೆಣಿಸು [ಅಡಕೆಗೆ+ಎಣಿಸು] ಎಂಬ ಅಭಿವ್ಯಕ್ತಿಯು ಕ್ಷುಲ್ಲಕವಾಗಿ ಕಾಣು ಎಂಬರ್ಥವನ್ನುಪಡೆಯುತ್ತದೆ ("ಆ ಭಾರತಿಯವಿದ್ಯಾಗುಣಕ್ಕಂ ಒಂದಡೆಕೆಗೆಣಿಸಳ್" ಕರ್ಣಪಾರ್ಯನ 'ನೇಮಿನಾಥಪುರಾಣ'). ಬೆಲೆಯಿಲ್ಲದ್ದು ಅಥವಾ ಅತ್ಯಲ್ಪಬೆಲೆಬಾಳುವಂಥದು ಎಂಬರ್ಥದಲ್ಲಿಯೂ ಅಡಕೆ ಶಬ್ದವನ್ನು ಬಳಸುತ್ತಿದ್ದರು: "ನೆಲನಾಳ್ದಹೆಣನೆಂದರೆ ಒಂದಡಿಕೆಗೆ ಕೊಂಬುವರಿಲ್ಲ" ಎಂಬುದುಬಸವಣ್ಣನವಚನದಲ್ಲಿಬರುತ್ತದೆ. ಜೇಡರ ದಾಸಿಮಯ್ಯ"ಒಂದು ಗೋಟಡಿಕೆಯಸೋಲೆ" ಎಂಬಮಾತನ್ನುಬಳಸುತ್ತಾನೆ. "ಗೋಟಡಿಕೆ ಚೀಟೆಲೆ" ಅಲ್ಪವನ್ನುಸೂಚಿಸುತ್ತದೆ. 'ಅಡಕೆಗೆಹೋದಮಾನ ಆನೆ ಕೊಟ್ಟರೂ ಬಾರದು" ಎಂಬ ಗಾದೆ ಇಂದಿಗೂ ಬಳಕೆಯಲ್ಲಿದೆ.

ಅಡಕೆಯ ಕಾಯನ್ನು ಕತ್ತರಿಸುವ ಸಾಧನವೇ 'ಅಡಕತ್ತಿ' ಅಥವಾ'ಅಡಕೊತ್ತು'. "ಅಡಕೆಗತ್ತಿಯುಹಡಪಸಂಬಳಿಗೆ" ಎಂಬಮಾತು'ಬಸವಪುರಾಣ'ದ್ದಾದರೆ,

**ಪುಟ 8ಕ್ಕೆ...**

### ಹಸ್ತಪ್ರತಿ ವಿಭಾಗ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ಸತತವಾಗಿ ಕಾರ್ಯನಿರತವಾಗಿರುತ್ತದೆ. ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2015ರ ಸೆಪ್ಟಂಬರ್ ತಿಂಗಳಿನಲ್ಲಿ 2 ಗ್ರಂಥಗಳ ಶುಷ್ಕ ಶುದ್ಧೀಕರಣ, 12 ಗ್ರಂಥಗಳಿಗೆ ತೈಲ ಲೇಪನ ಮತ್ತು ಮಸಿ ಲೇಪನ, 21 ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಮತ್ತು ಸ್ಕಾನ್ ಮಾಡಲು ಸಿದ್ಧಪಡಿಸಿರುವುದು , 17 ಗ್ರಂಥಗಳಿಗೆ ಸೂಚಿಗಳನ್ನು ತಯಾರಿಸಿರುವುದು, 14 ಗ್ರಂಥಗಳಿಗೆ ಅಟ್ಟೆ ಕಟ್ಟಿರುವುದು ಮತ್ತು 14 ಗ್ರಂಥಗಳಿಗೆ ಬಟ್ಟೆ ಕಟ್ಟಿರುವುದು ಈ ಎಲ್ಲಾ ಕೆಲಸಗಳನ್ನು ಮಾಡಿರಲಾಗಿರುತ್ತದೆ.

### ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ www.bmshri.org

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣವನ್ನು ಪುನರ್ ರೂಪಿಸಲಾಗಿರುತ್ತದೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ ವಿಶ್ವದಾದ್ಯಂತ ಕನ್ನಡ ಅಧ್ಯಯನ ಮಾಡುವ ಎಲ್ಲರಿಗೂ ಉತ್ತಮ ಸಂಪನ್ಮೂಲಗಳ ಕಣಜವಾಗಿರುವಂತೆ ಮಾಡಲು ವಿಶೇಷ ಶ್ರಮ ವಹಿಸಲಾಗುತ್ತಿದೆ. ಶೀಘ್ರದಲ್ಲಿ ಹಲವಾರು ನೂತನ ಶೈಲಿಯ ಸೌಲಭ್ಯಗಳನ್ನು ಈ ಜಾಲತಾಣದಲ್ಲಿ ಕಾಣಬಹುದು. ನಿಮ್ಮ ಸಲಹೆ ಸೂಚನೆಗಳಿಗೆ ಸ್ವಾಗತ

### ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳು ಈಗ ಯೂ ಟ್ಯೂಬ್ ನಲ್ಲಿ ಲಭ್ಯ

ಸದಸ್ಯರು ಹಾಗೂ ವಿಶ್ವದಾದ್ಯಂತ ಇರುವ ಪ್ರತಿಷ್ಠಾನದ ಅಭಿಮಾನಿಗಳ ಅನುಕೂಲಕ್ಕಾಗಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳ ಧ್ವನಿ ಮುದ್ರಿತ ಉಪನ್ಯಾಸಗಳು ಹಾಗೂ ವಿಡಿಯೋಗಳನ್ನು ಜನಪ್ರಿಯ ಯೂ ಟ್ಯೂಬ್ ನಲ್ಲಿ ಅಳವಡಿಸಲಾಗಿದೆ. ಇವುಗಳನ್ನು ತಲುಪಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ www.bmshri.orgಗೆ ಭೇಟಿ ನೀಡಿ.

...7ನೇ ಪುಟದಿಂದ

"ಅಡಕೊತ್ತುಮಜಿಸಿ ತರಹೋಗಿ ಪಾಪವನುನಡೆಸಿದುದ ಕಂಡ" ಎಂಬುದು ಸರ್ವಜ್ಞನ ಮಾತು. ಇಕ್ಕಟ್ಟಿನ ಪರಿಸ್ಥಿತಿಯನ್ನೂ 'ಅಡಕೊತ್ತು' ಎಂಬಮಾತುಸೂಚಿಸುತ್ತದೆ.

* * *

**ಅತ್ತಿಗೆ:** ಇದೊಂದು ಸಂಬಂಧಸೂಚಕ ಪದ; ಇದರ ಅರ್ಥ ಅಣ್ಣನ ಹೆಂಡತಿ ಅಥವಾ ಗಂಡನ ಸೋದರಿ ಎಂದು. ಈ ಶಬ್ದವು ಸಂಸ್ಕೃತದ 'ಅತ್ತಿಕಾ' ಎಂಬ ಶಬ್ದದಿಂದ ಬಂದುದೆಂದು ನಿಘಂಟುಗಳು ಹೇಳುತ್ತವೆ. ಸಂಸ್ಕೃತದಲ್ಲಿ ಆ ಶಬ್ದದ ಅರ್ಥ ತಾಯಿ ಅಥವಾ ಅಕ್ಕ ಎಂದು. ತಮಿಳಿನಲ್ಲಿ ಅತ್ತಾಚ್ಚಿ ಎಂಬುದು ಅತ್ತಿಗೆಯ ಸಮಾನಾರ್ಥಕ ಪದ; ತುಳುವಿನಲ್ಲಿ ಅತ್ತಿಗೆ ಎಂದೇ ಇದೆ. ಆದರೆ ಉತ್ತರ ಕರ್ಣಾಟಕದಲ್ಲಿ ವೈನಿ ಎಂಬ, ತೆಲುಗಿನಲ್ಲಿ ವದಿನೆ ಎಂಬ ತೀರ ಬೇರೆಯ ರೂಪದ ಪದಗಳು ದೊರಕುತ್ತದೆ. ಅತ್ತಿಗೆ ಎಂಬುದು ಕನ್ನಡದಲ್ಲಿ ತೀರ ಹಿಂದಿನಂದ ಅಣ್ಣನ ಹೆಂಡತಿ ಎಂಬರ್ಥವನ್ನು ಸೂಚಿಸುವ ಪದವಾಗಿ ಬಳಕೆಯಲ್ಲಿದೆ: "ಮುನ್ನಿನ ಜನ್ಮಾಂತರದತ್ತಿಗೆಯಪ್ಪಪೆಣ್ಣರಿ" ಎಂಬ ವಾಕ್ಯ ವಡ್ಡಾರಾಧನೆಯಲ್ಲಿದೆ.

ಅಚ್ಚಗನ್ನಡ ಪದವಾದ 'ಅಟ್ಟಿ' ಎಂಬುದಕ್ಕೆ ಪ್ರೀತಿ ಎಂಬರ್ಥವಿದೆ. ಇದರ ಜ್ಞಾತಿ ಪದವಾಗಿ ಮಲಯಾಳಂನಲ್ಲಿ 'ಅಟಿವು', ತುಳುವಿನಲ್ಲಿ ಅರ್ಕಮೆ, ತೆಲುಗಿನಲ್ಲಿ'ಅಕ್ಕರ' ಎಂಬ ರೂಪಗಳು ದೊರೆಯುತ್ತವೆ [ಕನ್ನಡದಲ್ಲಿಯೂ ಅಕ್ಕರೆ (ಅಟ್ಕರೆ) ಎಂಬಶಬ್ದವೂ ಇದೆ]. ಹೀಗಾಗಿ ಅಟ್ಟಿಗೆ ಎಂಬುದುಪ್ರೀತಿಯುಳ್ಳವಳು ಎಂಬ ಅರ್ಥವನ್ನು ಪಡೆಯುತ್ತದೆ. "ಮುನೀಶ್ವರನಪರಿಚರ್ಯೆಯೊಳ್‌ಪಿರಿದುಂ ಅಟ್ಟಿಗೆಯಾಗು" ಎಂಬ ಮಾತು ನಾಗವರ್ಮನ 'ಕರ್ಣಾಟಕ ಕಾದಂಬರಿ' (ಕಿಶ 990) ಕಾವ್ಯದಲ್ಲಿ ದೊರೆಯುತ್ತದೆ. ಆದರೆ ಇದಕ್ಕೂ ಮುಂಚಿನ 'ಪಂಪಭಾರತ' ದಲ್ಲಿಯೇ ಈ ಶಬ್ದವುನಲ್ಲೆ ಎಂಬರ್ಥದಲ್ಲಿ ದೊರೆಯುತ್ತದೆ: "ಪುರುಷವ್ರತಮೀಗಳಬ್ಬೆಯೆಂದು ಅತ್ತಿಗೆಯೆಂಬ ಮಾತನೆನಗೇನೆನಲಕ್ಕುಮೊ" (ನನ್ನ ಬ್ರಹ್ಮಚರ್ಯದಿಂದಾಗಿ ಈಗ ನಿನ್ನನ್ನು ತಾಯಿ ಎಂದು ಕರೆದು ಆನಂತರ ನಲ್ಲೆ ಎನ್ನಲು ಆಗಲಾರದು) ಎಂದು ಭೀಷ್ಮನು ಅಂಬೆಗೆ ಹೇಳುತ್ತಾನಂತೆ. 'ಅಟ್ಟಿಗೆ'ಯೇ ಅತ್ತಿಗೆಯಾಗಿರಬಹುದೇ ಎಂಬ ಅನುಮಾನ ಉಂಟಾಗುವುದುಸಹಜವೇ. ಆದರೆ ಅದಕ್ಕೆನಲ್ಲೆ ಎಂಬ ಅರ್ಥ ಅಲ್ಲಿ ದೂರಾನ್ವಯವಾಗಿ ಬರುತ್ತದೆ; ಹಾಗೆಯೇ ಆದರೆ 'ಅಟ್ಟಿಗ''ಅಟ್ಟಿಕಾಜ' ಎಂಬಶಬ್ದಗಳುಪ್ರೀತಿಯುಳ್ಳವನು ಎಂಬರ್ಥದಲ್ಲಿ 'ಸಮಯಪರೀಕ್ಷೆಯಲ್ಲಿ ದೊರಕುತ್ತದೆ. ಆದುದರಿಂದ ಅತ್ತಿಗೆಯ ಮೂಲ ಶಬ್ದ ಸಂಸ್ಕೃತದ 'ಅತ್ತಿಕಾ' ಎಂದು ತೀರ್ಮಾನಿಸಬಹುದು.

## ಕೋರಿಕೆ

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. ೨೦/ – ಆಗಿದ್ದು ಐದು ವರ್ಷಗಳ ಚಂದಾ ಹಣ ರೂ. ೧೦೦/– ಮಾತ್ರ.

ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath



**ಅಚ್ಚಾದ ಪುಸ್ತಕ** ತೆರೆದ–ಅಂಚೆ

*ಶ್ರೀಮತಿ/ಶ್ರೀ*..........................................................................

..................................................................................

..................................................................................

*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭